KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಡಿಸೆಂಬರ್ ೯, ೨೦೧೦ (ಮಾರ್ಗಶಿರ ೧೮, ಶಕ ವರ್ಷ ೧೯೩೨) | ಸಂಚಿಕೆ ೪೮ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಮಮಇ:56:ಮಅನಿ:2010, ಬೆಂಗಳೂರು, ದಿನಾಂಕ:10ನೇ ಆಗಸ್ಟ್, 2010**

ದೇವದಾಸಿ ಪುನರ್‌ವಸತಿ ಯೋಜನೆಯನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲು, ಕರ್ನಾಟಕ ದೇವದಾಸಿಯರ (ಸಮರ್ಪಣಾ ನಿಷೇಧ) (ತಿದ್ದುಪಡಿ) ವಿಧೇಯಕ, 2009ರ ಕಂಡಿಕೆ (2) 3ಡಿ (2) (3)ರನ್ವಯ ಈ ಕೆಳಕಂಡ ಜಿಲ್ಲೆಗಳಲ್ಲಿನ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರನ್ನು **"ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯನ್ನಾಗಿ"** ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದ ವರೆಗೆ ನೇಮಕ ಮಾಡಿ ಆದೇಶಿಸಿದೆ.

| ಕ್ರ. ಸಂ. | ಜಿಲ್ಲೆ | ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಗಳು |
|---|---|---|
| 1. | ಬೆಳಗಾವಿ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 2. | ಬಿಜಾಪುರ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 3. | ಬಾಗಲಕೋಟೆ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 4. | ಬಳ್ಳಾರಿ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 5. | ಕೊಪ್ಪಳ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 6. | ರಾಯಚೂರು | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 7. | ಗುಲ್ಬರ್ಗಾ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 8. | ಧಾರವಾಡ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| 9. | ಹಾವೇರಿ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |

| ಕ್ರ ಸಂ. | ಜಿಲ್ಲೆ | ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಗಳು |
|---|---|---|
| 10. | ಗದಗ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್.942

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಮಮಇ:56:ಮಅನಿ:2010, ಬೆಂಗಳೂರು, ದಿನಾಂಕ:16ನೇ ಸೆಪ್ಟೆಂಬರ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 56 ಮಅನಿ 2010, ದಿನಾಂಕ:10.08.2010ರಲ್ಲಿನ ನಾಲ್ಕನೇ ಸಾಲಿನಲ್ಲಿ "ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಯನ್ನಾಗಿ" ಪದಗಳ ನಂತರ "ಹಾಗೂ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ದೇವದಾಸಿ ಪುನರ್ವಸತಿ ಯೋಜನೆಯಡಿ ನೇಮಕವಾಗಿರುವ ಯೋಜನಾಧಿಕಾರಿಗಳು ದೇವದಾಸಿ ಸಮರ್ಪಣಾ ನಿಷೇಧಕ ಅಧಿಕಾರಿಗಳ ಜೊತೆ ಸಹಕರಿಸಿ ಕರ್ತವ್ಯ ನಿರ್ವಹಿಸಲು ಸಹ ಸೂಚಿಸಿದೆ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್.943

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 6 SSR 2009, Bangalore, Dated: 16.11.2010.**

Whereas, the draft of the following Rules further to amend the Karnataka Civil Services (Service and Kannada Language Examinations) Rules,1974 was published as required by clause (a) of sub-section (2) of section 3 read with section 8 of the Karnataka State Civil Services Act, 1978 (Karnataka Act 14 of 1990), in Notification No. DPAR 6 SSR 2009 dated 4.5.2010 in part IV-A(No.496) of the Karnataka Gazette Extra-ordinary dated 12.5.2010 inviting objections and suggestions from the persons likely to be affected thereby within 15 days from the date of publication of the draft in the Official Gazette.

Whereas the said Gazette was made available to the public on 12.5.2010.

And whereas no objections and suggestions have been received by the State Government.

Now, therefore, in exercise of the powers conferred by sub-section(1) and section (3) read with section (8) of the Karnataka State Civil Services Act, 1978 (Karnataka Act 14 of 1990) the Government of Karnataka makes the following rules, namely:-

**RULES**

**1. Title** and **commencement** .- (1) These rules may be called the Karnataka Civil Services (Service and Kannada Language Examinations) ($1^{st}$ Amendment) Rules, 2010.

(2) They shall come into force from the date of their publication in the Official Gazette.

**2. Amendment of Schedule II.-** In the Karnataka Civil Services (Service and Kannada Language Examinations) Rules, 1974, in SCHEDULE-II, in the Table, after the entries relating to Sl.No. 16, the following shall be inserted, namely:-

| | | |
|---|---|---|
| 16A. Karnataka Panchayat Raj Engineering Services | Executive Engineer,<br>Assistant Executive Engineer,<br>Assistant Engineer,<br>Registrar | (1) Accounts Higher<br>(2) PWD Higher Part-I and Part-II<br>(3) General Law Part-I and Part-II<br>(4) Community Development Part-I and Part-II |
| | Senior Geologist /<br>Geologist | (1) Accounts Higher<br>(2) PWD Higher Part-I and Part-II<br>(3) General Law Part-I and Part-II<br>(4) Mining Part-I and Part-II<br>(5) Community Development Part-I and Part-II |

| | | |
|---|---|---|
| | Superintendent /<br>Stores<br>Superintendent | (1) Accounts Higher<br>(2) PWD Higher Part-I and Part-II<br>(3) General Law Part-I and Part-II<br>(4) Community Development<br>Part-I and Part-II |
| | Accounts Superintendent | (1) Accounts Higher<br>(2) PWD Higher Part-I and Part-II<br>(3) General Law Part-I<br>(4) S.A.S. Part-I, Part-II and Part-III<br>(5) Community Development<br>Part-I and Part-II |
| | Junior Engineer/<br>First Division Assistant/First Division Store Keeper | (1) Accounts Higher<br>(2) PWD Higher Part-I and Part-II<br>(3) Community Development<br>Part-I and Part-II |
| | First Division Accounts Assistant/Computer Assistant<br>- cum - Office Assistant<br>Grade-I | 1) Accounts Higher<br>(2) PWD Higher Part-I and Part- II<br>(3) General Law Part-I and Part-II<br>(4) Community Development<br>Part-I and Part-II |
| | Second Division Assistant/<br>Second Division Accounts Assistant/Second Division Store Keeper / Godown Clerk/Computer Assistant Grade-II | (1) Accounts Lower<br>(2) PWD Lower Part-I and Part II<br>(3) Community Development<br>Part-I and Part-II |

By Order and in the name of the Governor of Karnataka,

**Devaraju**

Under Secretary to Government,

Department of Personnel & Administrative Reforms

(Service Rules-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 6 ಎಸ್‌ಎಸ್‌ಆರ್ 2009, ಬೆಂಗಳೂರು, ದಿನಾಂಕ:16.11.2010**

ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978 (1990ರ ಅಧಿನಿಯಮದ ಸಂಖ್ಯೆ:14)ರ 3ನೇ ಪ್ರಕರಣದ 2(ಎ) ಉಪ ಪ್ರಕರಣವನ್ನು ಪ್ರಕರಣ 8ರೊಂದಿಗೆ ಓದಿಕೊಂಡು ಅದರಲ್ಲಿ ಅಗತ್ಯಪಡಿಸಲಾದಂತೆ ಈ ಕೆಳಕಂಡ ಕರಡು ನಿಯಮಗಳನ್ನು ದಿನಾಂಕ 12.5.2010ರ ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯ ಭಾಗ(4–ಎ)(ನಂ.496)ದಲ್ಲಿ ಅಧಿಸೂಚನೆ ಸಂಖ್ಯೆ: ಸಿಆಸುಇ 6 ಎಸ್‌ಎಸ್‌ಆರ್ 2009 ದಿನಾಂಕ 4.5.2010ರಲ್ಲಿ ಪ್ರಕಟಿಸಿ ಅದರಿಂದ ಬಾಧಿತರಾಗಬಹುದಾದಂತಹ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ನಿಯಮಗಳು ಪ್ರಕಟವಾದ ದಿನಾಂಕದಿಂದ 15 ದಿನಗಳ ಒಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ರಾಜ್ಯಪತ್ರವನ್ನು ದಿನಾಂಕ 12ನೇ ಮೇ 2010ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ,

ಮತ್ತು ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳನ್ನು ಸರ್ಕಾರ ಸ್ವೀಕರಿಸದೇ ಇರುವುದರಿಂದ,

ಈಗ ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ:14)ರ 3ನೇ ಪ್ರಕರಣದ 1ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಂದಿಗೆ ಓದಿಕೊಂಡಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ರಚಿಸುತ್ತದೆ, ಎಂದರೆ:–

ನಿಯಮಗಳು

1. **ಶಿರೋನಾಮೆ ಮತ್ತು ಪ್ರಾರಂಭ.– (1)** ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು)(1ನೇ ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಇದು ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಷೆಡ್ಯೂಲ್–IIರ ತಿದ್ದುಪಡಿ.–** ಕರ್ನಾಟಕ ಸಿವಿಲ್ ಸೇವೆಗಳು (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ಷೆಡ್ಯೂಲ್–IIರಲ್ಲಿನ ಕ್ರಮ ಸಂಖ್ಯೆ: 16ರ ನಂತರ ಈ ಕೆಳಗಿನವುಗಳನ್ನು ಸೇರಿಸತಕ್ಕದ್ದು:–

| | | |
|---|---|---|
| 16ಎ.ಕರ್ನಾಟಕ ಪಂಚಾಯತ್ ರಾಜ್ ಇಂಜಿನಿಯರಿಂಗ್ ಸೇವೆಗಳು | ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಇಂಜಿನಿಯರ್, ನಿಬಂಧಕರು | (1)ಅಕೌಂಟ್ಸ್ ಹೈಯರ್<br>(2) ಪಿ.ಡಬ್ಲ್ಯು.ಡಿ ಹೈಯರ್ ಭಾಗ–1 ಮತ್ತು ಭಾಗ–2<br>(3) ಜನರಲ್ ಲಾ ಭಾಗ–1 ಮತ್ತು ಭಾಗ–2<br>(4) ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 ಮತ್ತು ಭಾಗ–2 |
| | ಹಿರಿಯ ಭೂ ವಿಜ್ಞಾನಿ/ಭೂ ವಿಜ್ಞಾನಿ | (1) ಅಕೌಂಟ್ಸ್ ಹೈಯರ್<br>(2) ಪಿ.ಡಬ್ಲ್ಯು.ಡಿ ಹೈಯರ್ ಭಾಗ–1 ಮತ್ತು ಭಾಗ–2<br>(3) ಜನರಲ್ ಲಾ ಭಾಗ–1 ಮತ್ತು ಭಾಗ–2<br>(4) ಮೈನಿಂಗ್ ಭಾಗ–1 ಮತ್ತು ಭಾಗ–2<br>(5) ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 ಮತ್ತು ಭಾಗ–2 |
| | ಅಧೀಕ್ಷಕರು/ಉಗ್ರಾಣ ಅಧೀಕ್ಷಕರು | (1) ಅಕೌಂಟ್ಸ್ ಹೈಯರ್<br>(2) ಪಿ.ಡಬ್ಲ್ಯು.ಡಿ ಹೈಯರ್ ಭಾಗ–1 ಮತ್ತು ಭಾಗ–2<br>(3) ಜನರಲ್ ಲಾ ಭಾಗ–1 ಮತ್ತು ಭಾಗ–2<br>(4) ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 ಮತ್ತು ಭಾಗ–2 |
| | ಲೆಕ್ಕಾಧೀಕ್ಷಕರು | (1) ಅಕೌಂಟ್ಸ್ ಹೈಯರ್<br>(2) ಪಿ.ಡಬ್ಲ್ಯು.ಡಿ ಹೈಯರ್ ಭಾಗ–1 ಮತ್ತು ಭಾಗ–2<br>(3) ಜನರಲ್ ಲಾ ಭಾಗ–1<br>(4) ಎಸ್.ಎ.ಎಸ್ ಭಾಗ–1, ಭಾಗ–2 ಮತ್ತು ಭಾಗ–3<br>(5) ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 ಮತ್ತು ಭಾಗ–2 |
| | ಕಿರಿಯ ಇಂಜಿನಿಯರ್/ ಪ್ರಥಮ ದರ್ಜೆ ಸಹಾಯಕ / ಪ್ರಥಮ ದರ್ಜೆ ಉಗ್ರಾಣಪಾಲಕ | (1) ಅಕೌಂಟ್ಸ್ ಹೈಯರ್<br>(2) ಪಿ.ಡಬ್ಲ್ಯು.ಡಿ ಹೈಯರ್ ಭಾಗ–1 ಮತ್ತು ಭಾಗ–2<br>(3) ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 ಮತ್ತು ಭಾಗ–2 |

| | | |
|---|---|---|
| | ಪ್ರಥಮ ದರ್ಜೆ ಲೆಕ್ಕ ಸಹಾಯಕರು / ಕಂಪ್ಯೂಟರ್ ಅಸಿಸ್ಟೆಂಟ್ – ಕಂ – ಆಫೀಸ್ ಅಸಿಸ್ಟೆಂಟ್ ಗ್ರೇಡ್–I | (1) ಅಕೌಂಟ್ಸ್ ಹೈಯರ್<br>(2)ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1 ಮತ್ತು ಭಾಗ–2<br>(3) ಜನರಲ್ ಲಾ ಭಾಗ–1 ಮತ್ತು ಭಾಗ–2<br>(4) ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 ಮತ್ತು ಭಾಗ–2 |
| | ದ್ವಿತೀಯ ದರ್ಜೆ ಸಹಾಯಕ/ದ್ವಿತೀಯ ದರ್ಜೆ ಲೆಕ್ಕ ಸಹಾಯಕ/ದ್ವಿತೀಯ ದರ್ಜೆ ಉಗ್ರಾಣ ಪಾಲಕ/ ಉಗ್ರಾಣ ಸಹಾಯಕ/ಕಂಪ್ಯೂಟರ್ ಅಸಿಸ್ಟೆಂಟ್ ಗ್ರೇಡ್–II | (1) ಅಕೌಂಟ್ಸ್ ಲೋಯರ್<br>(2) ಪಿ.ಡಬ್ಲ್ಯೂ.ಡಿ. ಲೋಯರ್ ಭಾಗ–1 ಮತ್ತು ಭಾಗ–2<br>(3) ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ 1 ಮತ್ತು ಭಾಗ–2 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.947

**ದೇವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–1)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 177 SRE 2010, Bangalore, Dated:22nd November, 2010**

Whereas certain allegations have been made regarding illegal allotment of sites by Bangalore Development Authority (BDA) and denotification of land notified by BDA. Similarly, allegations have been made regarding illegal denotification of land by Karnataka Industrial Area Development Board (KIADB), Karnataka Housing Board (KIIB) and Urban Local Bodies (ULBs).

2. Whereas Government of Karnataka is of the opinion that it is necessary to appoint a Commission of Inquiry for the purpose of making inquiry into all these cases of alleged illegalities

3. Now, therefore, in exercise of powers conferred by Section 3 of the Commission of Inquiry Act, 1952 (Central Act 60 of 1952), Government of Karnataka hereby appoints a Commission of Inquiry consisting of Hon'ble Mr. Justice B. Padmaraj, former Judge of High Court of Karnataka.

4. The terms of reference of the Commission of Inquiry shall be as follows:

(1) to enquire into the illegalities in the matter of allotment of G-Category sites by BDA;

(2) to enquire into the illegalities in the matter of denotification of land notified by BDA for acquisition;

(3) to enquire into the illegalities in the matter of allotment of industrial sites and industrial areas by the KIADB;

(4) to enquire into the illegalities in the matter of denotification of land notified by KIADB for acquisition;

(5) to enquire into the illegalities in the matter of denotification of land notified by the KHB;

(6) to enquire into the illegalities in the matter of denotification of the land notified for the ULBs under the Land Acquisition Act;

(7) to fix responsibility on the persons responsible for such illegalities mentioned at (1) to (6) above;

(8) to suggest remedial measures to prevent any illegalities in these matters;

(9) any other matter relating to the illegalities in land related matters that may be referred by the Government.

5. The scope of inquiry by this Commission shall cover the period commencing from 01.01.1995 till the date of issue of this Notification.

6. Under Sub Section (1) of Section 5 of the Commission of Inquiry Act, the Government of Karnataka hereby directs that the provisions of Sub Section (2), (3) and (5) of the said Section shall apply to the said Commission.

7. The Commission shall complete the enquiry and give its report within a period of one year.

8. The Commission shall have its Head Quarters at Bangalore and have sittings at such places as it deems necessary.

By Order and in the name of the Governor of Karnataka,

**B.G. KRISHNAMURTHY**

PR-948

Additional Secretary to Government,

Department of Personnel & Administrative Reforms (Service Rules).

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂ:ನಅಇ 92 ಸಿ.ಎಸ್.ಎಸ್. 2009, ಬೆಂಗಳೂರು, ದಿನಾಂಕ:26ನೇ ನವೆಂಬರ್, 2009**

ಕರ್ನಾಟಕ ಮಾಹಿತಿ ಹಕ್ಕು 2005 (2005ರ ಕೇಂದ್ರೀಯ ಕಾಯ್ದೆ 22) ರ ಪರಿಚ್ಛೇದ 4 ರೊಂದಿಗೆ ಪರಿಚ್ಛೇದ 28 ನ್ನು ಓದಲಾಗುವ ಅಧಿಕಾರಗಳನ್ನು ಪರಿಗಣಿಸಿ ರಾಜ್ಯಸರ್ಕಾರವು ಈ ಕೆಳಕಂಡ ನಿಯಮಗಳನ್ನು ರೂಪಿಸಿರುತ್ತದೆ:

**1. ಶೀರ್ಷಿಕೆ ಮತ್ತು ಆರಂಭ:** (1) ಈ ನಿಯಮಗಳನ್ನು ಕರ್ನಾಟಕ ಮಾಹಿತಿ ಹಕ್ಕು (ನಾಗರೀಕ ಸೇವೆಗಳನ್ನು ಒದಗಿಸುವ ಪ್ರಾಧಿಕಾರಗಳಿಂದ ಮಾಹಿತಿ ಘೋಷಣೆ) ನಿಯಮಗಳು, 2009.

(2) ಇದು ಕೂಡಲೇ ಜಾರಿಗೆ ಬರುವುದು

**2. ವ್ಯಾಖ್ಯೆಗಳು:** (1) ಈ ನಿಯಮಗಳಲ್ಲಿ, ಅನ್ಯ ಸಂದರ್ಭಗಳ ಉಲ್ಲೇಖ ಇಲ್ಲದಿದ್ದಲ್ಲಿ:

(ಎ) 'ಕಾಯ್ದೆ' ಎಂದರೆ ಮಾಹಿತಿ ಹಕ್ಕು ಕಾಯ್ದೆ, 2005 (2005ರ ಕೇಂದ್ರ ಕಾಯ್ದೆ 22)

(ಬಿ) 'ಮಾಹಿತಿ ಪ್ರಕಟಣೆ' ಎಂದರೆ ಯಾದಿಯಲ್ಲಿ ನಮೂದಿತವಾದ ಮಾಹಿತಿಯ ಪ್ರಕಟಣೆ

(ಸಿ) 'ಪ್ರಾಧಿಕಾರಗಳು' ಎಂದರೆ:

1. ಕರ್ನಾಟಕ ಮಹಾನಗರಪಾಲಿಕೆ ಕಾಯ್ದೆ 1976 (1977 ರ ಕರ್ನಾಟಕ ಕಾಯ್ದೆ 14) ರ ಅನ್ವಯ ರಚಿಸಲ್ಪಟ್ಟಿರುವ ಮಹಾನಗರ ಪಾಲಿಕೆ ಅಥವಾ ಕರ್ನಾಟಕ ಪುರಸಭೆಗಳ ಕಾಯ್ದೆ 1964 (1964ರ ಕರ್ನಾಟಕ ಕಾಯ್ದೆ 22) ರ ಅನ್ವಯ ರಚಿಸಲ್ಪಟ್ಟಿರುವ ನಗರಸಭೆ ಅಥವಾ ಪಟ್ಟಣ ಪುರಸಭೆ ಮತ್ತು ಪಟ್ಟಣ ಪಂಚಾಯ್ತಿ ಮತ್ತು ಭಾರತ ಸಂವಿಧಾನದ ಅನುಚ್ಛೇದ 243Q ರಡಿಯಲ್ಲಿ ರಚಿಸಲ್ಪಟ್ಟಿರುವ ಇತರೇ ಸಂಸ್ಥೆಗಳು ಅಥವಾ ಸಮಿತಿಗಳು, ನಾಗರೀಕ ಸೇವೆಗಳನ್ನು ಒದಗಿಸುವ ಇತರೇ ಪ್ರಾಧಿಕಾರಗಳು.
2. ಭಾರತ ಸಂವಿಧಾನದ 12ನೇ ಅನುಸೂಚಿ, ಕರ್ನಾಟಕ ಪುರಸಭೆಗಳ ಕಾಯ್ದೆ 1964 ಮತ್ತು ಕರ್ನಾಟಕ ಮಹಾನಗರ ಪಾಲಿಕೆಗಳ ಕಾಯ್ದೆ 1976ರ ಪ್ರಕಾರ ನಾಗರೀಕ ಸೇವೆಗಳನ್ನು ನೀಡುತ್ತಿರುವ ಯಾವುದೇ ನಾಮದಿಂದ ಗುರುತಿಸಿಕೊಂಡಿರುವ ಇತರೇ ಪ್ರಾಧಿಕಾರಗಳು, ಸಂಸ್ಥೆಗಳು ಮತ್ತು ಸಮಿತಿಗಳು.

(ಡಿ) 'ಅನುಸೂಚಿ' ಎಂದರೆ ಕಾಯ್ದೆಯ ಅನುಸೂಚಿ

(ಇ) 'ಪರಿಚ್ಛೇದ' ಎಂದರೆ ಕಾಯ್ದೆಯ ಪರಿಚ್ಛೇದ

(2) ಈ ನಿಯಮಗಳಲ್ಲಿ ವ್ಯಾಖ್ಯಿಸದಿರುವ ಆದರೆ ಕಾಯ್ದೆಯಲ್ಲಿ ವ್ಯಾಖ್ಯಿಸಿರುವ ಪದಗಳು ಕಾಯ್ದೆಯಲ್ಲಿ ನೀಡಿರುವ ವ್ಯಾಖ್ಯೆಯನ್ನು ಹೊಂದಿರುತ್ತವೆ.

**3. ಸಾರ್ವಜನಿಕ ಪ್ರಾಧಿಕಾರಗಳಿಂದ ಮಾಹಿತಿ ಪ್ರಕಟಣೆ:** (1) ಕಾಯ್ದೆಯ ಅನುಸೂಚಿ ಕಲಂ (2)ರಲ್ಲಿ ನಮೂದಿತವಾಗಿರುವ ಸಾರ್ವಜನಿಕ ಪ್ರಾಧಿಕಾರಗಳು ಕಲಂ (3) ರಲ್ಲಿ ನಮೂದಿಸಿದಂತೆ ಮಾಹಿತಿಯನ್ನು, ಕಲಂ (4) ರಲ್ಲಿ ನಮೂದಿಸಿದ ಮಟ್ಟದಲ್ಲಿ, ಮತ್ತು ಕಲಂ (5) ರಲ್ಲಿ ನಮೂದಿತವಾಗಿರುವ ಅವಧಿಗಳಲ್ಲಿ ಮಾಹಿತಿಯನ್ನು ಈ ನಿಯಮಗಳು ಜಾರಿಗೆ ಬಂದ ಒಂದು ವರ್ಷ ಅವಧಿಯ ನಂತರ ಪ್ರಕಟಿಸಬೇಕು.

(ಎ) ಜಿಲ್ಲೆಯಲ್ಲಿ ಪ್ರಸಾರವಿರುವ ಕನಿಷ್ಠ ಒಂದು ವಾರ್ತಾ ಪತ್ರಿಕೆಯಲ್ಲಿ ಕಛೇರಿಯ ವಿಳಾಸ, ಅಂತರ್ಜಾಲ ಮತ್ತು / ಅಥವಾ ಇ–ಮೇಲ್ ಮತ್ತು ಮಾಹಿತಿ ಲಭ್ಯತೆಯ ಇತರೇ ಸಂಪರ್ಕ ವಿವರಗಳನ್ನು ಒಳಗೊಂಡ ಮಾಹಿತಿ ಸಾರಾಂಶವನ್ನು ಪ್ರಕಟಿಸುವುದು.

(ಬಿ) ಸ್ಥಳೀಯ ಪ್ರಾಧಿಕಾರದ ಅಂತರ್ಜಾಲದಲ್ಲಿ ಸಂಪೂರ್ಣ ಮಾಹಿತಿಯನ್ನು ಪ್ರಕಟಿಸುವುದು.

(ಸಿ) ಪ್ರಾಧಿಕಾರದ ಸೂಚನಾಫಲಕ;

(ಡಿ) ವಾರ್ಡ್ ಕಛೇರಿಗಳಿದ್ದಲ್ಲಿ ಅವುಗಳ ಸೂಚನಾಫಲಕ

(2) ರಾಜ್ಯ ಸರ್ಕಾರವು ಈ ಕಾಯ್ದೆಯಡಿ ನಿರೂಪಿಸಿದಂತೆ ಅಥವಾ ಕಾಲ ಕಾಲಕ್ಕೆ ಹೊರಡಿಸುವ ಅಧಿಸೂಚನೆಯಂತೆ ಇತರೇ ವಿಧಾನ.

(3) ಮಾಹಿತಿ ಹಕ್ಕು ಕಾಯ್ದೆ ಅಡಿಯಲ್ಲಿ ನೇಮಿಸಲ್ಪಟ್ಟ ಪ್ರಾಧಿಕಾರಗಳ ಸಾರ್ವಜನಿಕ ಮಾಹಿತಿ ಅಧಿಕಾರಿಯು ಮಾಹಿತಿ ಪ್ರಕಟಣೆಯ ಜವಾಬ್ದಾರಿಯನ್ನು ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಅನುಸೂಚಿ–IA**

**ಅಧಿಸೂಚನೆ ಸಂಖ್ಯೆ: ಯುಡಿಡಿ 92 ಸಿಎಸ್ಎಸ್ 2009, ದಿನಾಂಕ: 26–11–2009 ರ ಅನುಬಂಧ**

**"ಕರ್ನಾಟಕ ಮಾಹಿತಿ ಹಕ್ಕು ಕಾಯ್ದೆ (ಸ್ಥಳೀಯ ಅಧಿಕಾರಿಗಳಿಂದ ಮಾಹಿತಿ ಪ್ರಕಟಣೆ ನಿಯಮಗಳು, 2009)" ಅಡಿಯಲ್ಲಿ**

**ನಗರಾಭಿವೃದ್ಧಿ ಇಲಾಖೆಯು ಪ್ರಕಟಿಸಬೇಕಾದ ದತ್ತಾಂಶ / ಮಾಹಿತಿ**

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| 1 | ನಗರ ಯೋಜನೆ, ಪಟ್ಟಣ ಯೋಜನೆಗಳನ್ನೊಳಗೊಂಡಂತೆ | 1. ನಗರ ಯೋಜನಾ ಪ್ರಾಧಿಕಾರ | 1. ವಲಯ ನಿಬಂಧನೆಗಳು ಒಳಗೊಂಡಂತೆ ಯೋಜನಾ ವರದಿಗಳು ಮತ್ತು ನಕ್ಷೆಗಳು | ಪ್ರಸಕ್ತ ಚಾಲ್ತಿಯಲ್ಲಿರುವ ಯೋಜನೆ | ನ.ಸ್ಥ.ಸಂ | 1. ವಾರ್ಷಿಕ<br>2. ಬದಲಾವಣೆಗಳಾದ ಸಂದರ್ಭಗಳಲ್ಲಿ ಪ್ರಕಟಣೆ | |
| | | 2. ನಗರಾಭಿವೃದ್ಧಿ ಪ್ರಾಧಿಕಾರ | 2. ಯೋಜನಾ ಜಿಲ್ಲೆಗಳ ನಕ್ಷೆಗಳು | ಪ್ರಸಕ್ತ ಚಾಲ್ತಿಯಲ್ಲಿರುವ ಯೋಜನೆ | ನ.ಸ್ಥ.ಸಂ | 1. ವಾರ್ಷಿಕ<br>2. ಬದಲಾವಣೆಗಳಾದ ಸಂದರ್ಭಗಳಲ್ಲಿ ಪ್ರಕಟಣೆ | |
| | | 3. ಪುರಸಭಾ ಯೋಜನಾ ಪ್ರಾಧಿಕಾರ | 3. ತತ್ಕಾಲೀನ ಮತ್ತು ಅಂತಿಮವಾಗಿ ಅಂಗೀಕೃತ ಬಡಾವಣೆಗಳ ವಿವರ (ಸರ್ವೆ ನಂ, ಮಾಲೀಕನ ಹೆಸರು, ನಿವೇಶನದ ವಿವರ) | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ | 1. ಅರ್ಧ ವಾರ್ಷಿಕ | |
| | | 4. ನ.ಸ್ಥ.ಸಂ | 4. ಸಮಗ್ರ ಅಭಿವೃದ್ಧಿ ಯೋಜನೆಗಳ ವರದಿ ಮತ್ತು ನಕ್ಷೆಗಳು | ಪ್ರಸಕ್ತ ಯೋಜನೆ | ನ.ಸ್ಥ.ಸಂ | 1. ವಾರ್ಷಿಕ<br>2. ಬದಲಾವಣೆಗಳಾದ ಸಂದರ್ಭಗಳಲ್ಲಿ ಪ್ರಕಟಣೆ | |
| 2 | ಭೂ ಉಪಯೋಗ ಮತ್ತು ಕಟ್ಟಡಗಳ ನಿರ್ಮಾಣದ ನಿಯಂತ್ರಣ | ನಗರಾಭಿವೃದ್ಧಿ ಪ್ರಾಧಿಕಾರ / ನ.ಸ್ಥ.ಸಂ | 1) ಕಟ್ಟಡ ನಿರ್ಮಾಣ ಹಾಗೂ ಪೂರ್ಣತೆಯ ವಿವರಗಳನ್ನು ಹೊಂದಿರುವ ಪ್ರಮಾಣಪತ್ರ (ಒಟ್ಟು ಸ್ವೀಕೃತವಾದ ಅರ್ಜಿಗಳು, ಒಟ್ಟು ಮಂಜೂರಾದ ಅನುಮತಿ, ಸ್ಥಳ ವಿವರಗಳು) | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ | ವಾರ್ಷಿಕ | |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| | | | 2) ಅನುಮೋದನೆಗೊಂಡ ಕಾರ್ಖಾನೆಗಳ ಮತ್ತು ವಾಣಿಜ್ಯ ಸಂಕೀರ್ಣಗಳ ವಿವರ (ಸರ್ವೆ ನಂ., ವಿಧ, ಮಾಲೀಕನ ಹೆಸರು) | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ | ವಾರ್ಷಿಕ | |
| 3 | ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗಾಗಿ ಯೋಜನೆ | ನ.ಸ್ಥ.ಸಂ | 1) ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳ ಪಟ್ಟಿ– ಉದಾ: ಶೇ. 18 ಕಾರ್ಯಕ್ರಮ, ಆಶ್ರಯ ಮತ್ತು ಸರ್ಕಾರದ ಇತರೇ ಕಾರ್ಯಕ್ರಮಗಳು<br>2) ಈ ಕಾರ್ಯಕ್ರಮಗಳಿಗಾಗಿ ಆಯವ್ಯಯದಲ್ಲಿ ಕಾದಿರಿಸಲಾದ ಮೊತ್ತದ ವಿವರಗಳು ಹಾಗೂ ವೆಚ್ಚಗಳು<br>3) ಫಲಾನುಭವಿಗಳ ವಿವರಗಳು | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ | ವಾರ್ಷಿಕ | |
| 4 | ರಸ್ತೆಗಳು ಮತ್ತು ಸೇತುವೆಗಳು | ನ.ಸ್ಥ.ಸಂ / ನಗರಾಭಿವೃದ್ಧಿ ಪ್ರಾಧಿಕಾರ | 1) ರಸ್ತೆಯ ಒಟ್ಟು ಉದ್ದ (ರಸ್ತೆಯ ವಿಧಗಳು, ಇದರ ಉದ್ದ ಮತ್ತು ಅಗಲ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ / ವಾರ್ಡ್ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 2) ಪ್ರಸ್ತಾವಿಸಿದ ರಸ್ತೆಯ ವಿವರಗಳು ಮತ್ತು ಕಾರ್ಪೆಟಿಂಗ್ / ಮರು– ಕಾರ್ಪೆಟಿಂಗ್‌ಗಾಗಿ ಕಾರ್ಯಗತಗೊಳಿಸಿರುವ ವಿವರಗಳು | ಪ್ರಸಕ್ತ ವರ್ಷ | ನ.ಸ್ಥ.ಸಂ | ವಾರ್ಷಿಕ | |
| | | | 3) ಮುಖ್ಯರಸ್ತೆಯ ಒಟ್ಟು ವಿಸ್ತೀರ್ಣದಲ್ಲಿ ಪಾದಚಾರಿ ಮಾರ್ಗಕ್ಕಾಗಿ ಇರಿಸಿರುವ ಒಟ್ಟು ಶೇಕಡ ಮೊತ್ತ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | 40 ಅಡಿಗಳಿಗಿಂತಲೂ ಅಗಲವಿರುವ ರಸ್ತೆಗಳನ್ನು ಮುಖ್ಯರಸ್ತೆಗಳೆಂದು ವ್ಯಾಖ್ಯಾನಿಸಲಾಗಿದೆ |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| 5 | ಗೃಹಬಳಕೆ, ಕಾರ್ಖಾನೆ ಹಾಗೂ ವಾಣಿಜ್ಯ ಉಪಯೋಗಗಳಿಗೆ ನೀರು ಸರಬರಾಜು | ಜಲ ಮಂಡಳಿ / ನ.ಸ್ಥ.ಸಂ | 1) ಒಟ್ಟು ನೀರು ಸರಬರಾಜಿನ ಶೇಕಡವಾರು ಪ್ರಮಾಣ (ಮೇಲ್ಭಾಗ, ಅಂತರ್ಜಲ ಹಾಗೂ ಹೊರಗಿನ ಮೂಲ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ ಮಟ್ಟ | ಅರ್ಧ ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 2) ನೀರಿನ ಸಂಪರ್ಕಗಳ ಒಟ್ಟು ಸಂಖ್ಯೆ ಮತ್ತು ಸೇರ್ಪಡೆಗೊಂಡಿರುವ (Coverage) ಶೇಕಡವಾರು ಪ್ರಮಾಣ (ಗೃಹಪಯೋಗಿ / ಸಾರ್ವಜನಿಕ ನಲ್ಲಿಗಳು / ವಾಣಿಜ್ಯ ಮತ್ತು ಕೈಗಾರಿಕಾ ಸಂಪರ್ಕಗಳು) ನೀರು ಸರಬರಾಜಿನ ಪ್ರಮಾಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ ಮಟ್ಟ | ಅರ್ಧ ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 3) ನೀರು ಸರಬರಾಜಿನ ದಿನ ಮತ್ತು ಸಮಯ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ ಮಟ್ಟ | ಅರ್ಧ ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 4) ನೀರು ಸರಬರಾಜಿನ ಗುಣಮಟ್ಟ (ಜಲ ಕಾಯ್ದೆಯ ನಿಬಂಧನೆಗಳನ್ವಯ ಮಾದರಿಗಳನ್ನು ಪಾಲಿಸುವುದು) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ ಮಟ್ಟ | ಅರ್ಧ ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 5) ನೀರು ಸರಬರಾಜು ಸೇವೆಗಳ ವೆಚ್ಚ ವಸೂಲಿ (ಪ್ರತಿ ಕಿ.ಲೀ ನೀರಿಗೆ ಉತ್ಪಾದಿಸಲ್ಪಟ್ಟ ವರಮಾನ / ಪ್ರತಿ ಕಿ.ಲೀ ನೀರಿಗೆ ಭರಿಸಲಾದ ವೆಚ್ಚ) | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ ಮಟ್ಟ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 6) ಜಲ ಶುಲ್ಕ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ ಮಟ್ಟ | ವಾರ್ಷಿಕ | |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| | | | ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ | | | | |
| 6 | ಸಾರ್ವಜನಿಕ ಆರೋಗ್ಯ, ನಿರ್ಮಲೀಕರಣ ಮತ್ತು ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ | ನ.ಸ್ಥ.ಸಂ / ಜಲ ಮಂಡಳಿ / ನಗರಾಭಿವೃದ್ಧಿ ಪ್ರಾಧಿಕಾರ | 1) ಬೀದಿಗಳಲ್ಲಿ ಕಸ ಗುಡಿಸುವುದು (ರಸ್ತೆವಾರು ಗುಡಿಸುವ ಕಾರ್ಯಕ್ರಮ ಪಟ್ಟಿ) | ಕಾರ್ಯ ಯೋಜನೆಯಲ್ಲಿರುವಂತೆ ಪ್ರಸಕ್ತ ಸ್ಥಿತಿ | ನ.ಸ್ಥ.ಸಂ / ವಾರ್ಡ್ | ಅರ್ಧ ವಾರ್ಷಿಕ | ಬೀದಿ ಕಸ ಗುಡಿಸುವುದು – ರಸ್ತೆ ಹಾಗೂ ರಸ್ತೆ ಬದಿಯ ಚರಂಡಿಗಳನ್ನು ಒಳಗೊಂಡಿರುತ್ತದೆ |
| | | | 2) ಘನ ತ್ಯಾಜ್ಯ ವಸ್ತುಗಳ ನಿರ್ವಹಣೆಯ ಸಾಮಾನ್ಯ ಅಂಕಿಅಂಶಗಳು (ಉತ್ಪಾದನೆಯ ಪ್ರಮಾಣ, ದ್ವಿತೀಯ ಸಂಗ್ರಹಣೆಯ ಅಂಶಗಳ ವಿವರಗಳು, ಭೂ ಭರ್ತಿ ಸ್ಥಳ, ಬಳಕೆದಾರರ ಶುಲ್ಕ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 3) ಮನೆ ಬಾಗಿಲುಗಳಿಂದ ತ್ಯಾಜ್ಯ ಸಂಗ್ರಹಣೆಯಲ್ಲಿ ಸೇರ್ಪಡೆಯಾಗಿರುವ ಮನೆಗಳ ಶೇಕಡವಾರು ವಿವರ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ಅರ್ಧ ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 4) ತ್ಯಾಜ್ಯ ಬೇರ್ಪಡಿಸುವಿಕೆಯಲ್ಲಿ ಪಾಲ್ಗೊಂಡಿರುವ ಮನೆಗಳ ಶೇಕಡವಾರು ಸಂಖ್ಯೆ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ಅರ್ಧ ವಾರ್ಷಿಕ | |
| | | | 5) ವೈಜ್ಞಾನಿಕವಾಗಿ ಪರಿಷ್ಕರಿಸಲಾದ ಮತ್ತು ನಿರ್ವಹಿಸಲಾದ ಸ್ಥಳೀಯ ಘನ ತ್ಯಾಜ್ಯ ವಸ್ತುಗಳ ಶೇಕಡವಾರು ಪ್ರಮಾಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 6) ಘನ ತ್ಯಾಜ್ಯ ವಸ್ತುಗಳ ನಿರ್ವಹಣಾ ವೆಚ್ಚದ ವಸೂಲಿ (ಪ್ರತಿ ಟನ್ ಘನ ತ್ಯಾಜ್ಯಗಳಿಂದ ಉತ್ಪತ್ತಿಯಾಗುವ ಆದಾಯ / ಪ್ರತಿ ಟನ್ ಘನ ತ್ಯಾಜ್ಯ ವಸ್ತುಗಳ ನಿರ್ವಹಣೆಗಾಗಿ ವೆಚ್ಚ (ರೂ.ಗಳಲ್ಲಿ) | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| | | | **ಒಳಚರಂಡಿ ಮತ್ತು ಚರಂಡಿ:** | | | | |
| | | | 7) ಒಳಚರಂಡಿಗಳ ಲಭ್ಯತೆಯ ಶೇಕಡವಾರು ಪ್ರಮಾಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 8) ಕೊಳಚೆ ನೀರಿನ ಪರಿಷ್ಕರಣೆಯ ಶೇಕಡವಾರು ಪ್ರಮಾಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 9) ಪರಿಷ್ಕೃತ ಕೊಳಚೆ ನೀರಿನ ಪುನರ್ ಬಳಕೆ ಮತ್ತು ಪುನರಾವರ್ತನೆಯ ಶೇಕಡವಾರು ಪ್ರಮಾಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 10) ಒಳಚರಂಡಿ ವ್ಯವಸ್ಥೆಯಲ್ಲಿ ವೆಚ್ಚ ವಸೂಲಿ (ಆದಾಯ ಸಂಗ್ರಹಣೆ / ಖರ್ಚು (ರೂ. ಗಳಲ್ಲಿ) | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | **ಮಳೆನೀರಿನ ಚರಂಡಿಗಳು** | | | | |
| | | | 11) ಮಳೆನೀರು ಚರಂಡಿಗಳ ಅಂಕಿಅಂಶ (ಸ್ಥಳ, ಉದ್ದ ಮತ್ತು ಸ್ವಚ್ಛತಾ ಪುನರಾವರ್ತನೆ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 12) ರಸ್ತೆ ಉದ್ದಕ್ಕನುಗುಣವಾಗಿ ರಸ್ತೆ ಬದಿಯ ಚರಂಡಿಗಳ ಶೇಕಡವಾರು ಪ್ರಮಾಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 13) ನೀರು ನಿಲ್ಲುವ ಮತ್ತು ಪ್ರವಹಿಸುವ ಪ್ರಸಂಗಗಳು (ಪ್ರಸಂಗಗಳ ವಾರ್ಷಿಕ ಸಂಖ್ಯೆ / ಗುರುತಿಸಲಾದ ಜಾಗಗಳ ಒಟ್ಟು ಸಂಖ್ಯೆ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| | | | **ಸಾರ್ವಜನಿಕ ಆರೋಗ್ಯ (ಅನ್ವಯವಾದಲ್ಲಿ)** | | | | |
| | | | 14) ಸ್ಥಳೀಯ ಆಸ್ಪತ್ರೆಗಳ ಸಂಖ್ಯೆ ಮತ್ತು ಅವುಗಳ ಸ್ಥಳ ವಿವರಗಳು | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 15) ಲಭ್ಯವಿರುವ ಸೌಕರ್ಯಗಳು ಮತ್ತು ಹೊರರೋಗಿ ವಿಭಾಗದ ಸಮಯ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 16) ಪ್ರತಿ ಸಾವಿರ ಜನಸಂಖ್ಯೆಗೆ ಸೊಳ್ಳೆ ಇತರ ಕ್ರಿಮಿಕೀಟಗಳಿಂದ ಹರಡುವ ರೋಗಗಳ ಸಂಖ್ಯೆ | | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 17) ಪ್ರತಿ ಸಾವಿರ ಜನಸಂಖ್ಯೆಗೆ ನೀರಿನಿಂದ ಹರಡುವ ರೋಗದ ಪ್ರಕರಣಗಳ ಸಂಖ್ಯೆ | | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | **ವೃಕ್ಷಗಳು (ಅನ್ವಯವಾದಲ್ಲಿ)** | | | | |
| 8 | ನಗರ ಅರಣ್ಯ, ಪರಿಸರ ಸಂರಕ್ಷಣೆ ಮತ್ತು ಜೀವ ಸಂಕೋಲನೆ | ನ.ಸ್ಥ.ಸಂ | 1) ಪ್ರಸ್ತುತ ಮರಗಳಲ್ಲಿ ಕಡಿಯಲ್ಪಟ್ಟ / ಬುಡಮೇಲು ಮಾಡಲ್ಪಟ್ಟ ಮರಗಳ ಸಂಖ್ಯೆ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ಅರ್ಧ ವಾರ್ಷಿಕ | |
| | | | 2) ಕಡಿಯಲ್ಪಟ್ಟ / ಬುಡಮೇಲು ಮಾಡಲ್ಪಟ್ಟ ಮರಗಳ ಸಂಖ್ಯೆಗನುಗುಣವಾಗಿ ನೆಡಲಾದ ಸಸಿಗಳ ಸಂಖ್ಯೆ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ಅರ್ಧ ವಾರ್ಷಿಕ | |
| | | | **ಜಲಮೂಲಗಳು (ಅನ್ವಯವಾದಲ್ಲಿ)** | | | | |
| | | | 3) ಜಲಮೂಲಗಳ ಪ್ರಸ್ತುತ ಸಂಖ್ಯೆ, ಪುನರುಜ್ಜೀವನಕ್ಕೆ ಬಂದ ಪ್ರಸ್ತಾಪಗಳು, ಆಯವ್ಯಯ ಮತ್ತು ವೆಚ್ಚ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| 9 | ಕೊಳಚೆ ಪ್ರದೇಶಗಳ ಸುಧಾರಣೆ ಮತ್ತು ಉನ್ನತೀಕರಣ | ನ.ಸ್ಥ.ಸಂ / ನಗರಾಭಿವೃದ್ಧಿ ಪ್ರಾಧಿಕಾರ | 1) ಘೋಷಿತ ಮತ್ತು ಅಘೋಷಿತ ಕೊಳಚೆ ಪ್ರದೇಶಗಳ ವಿವರ (ಸಂಖ್ಯೆ, ಸ್ಥಳ, ಕುಟುಂಬಗಳ ಸಂಖ್ಯೆ, ಜನಸಂಖ್ಯೆ, ಪ್ರದೇಶ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ / ವಾರ್ಡ್ | ಅರ್ಧ ವಾರ್ಷಿಕ | |
| | | | 2) ಕೊಳಚೆ ಪ್ರದೇಶಗಳ ಸುಧಾರಣಾ ಕಾರ್ಯಕ್ರಮಗಳ ವಿವರ (ಕಾರ್ಯಕ್ರಮಗಳು, ಪ್ರಯೋಜನ ಪಡೆದ ಕೊಳಚೆ ಪ್ರದೇಶಗಳು, ಆಯವ್ಯಯ ಮತ್ತು ವೆಚ್ಚ) | ಪ್ರಸಕ್ತ ವರ್ಷ ಒಳಗೊಂಡಂತೆ ಕಳೆದ 3 ಆರ್ಥಿಕ ವರ್ಷಗಳು | ನ.ಸ್ಥ.ಸಂ / ವಾರ್ಡ್ | ಅರ್ಧ ವಾರ್ಷಿಕ | |
| | | | 3) ಪ್ರತಿ ಕಾರ್ಯಕ್ರಮದಡಿಯಲ್ಲಿ ಫಲಾನುಭವಿಗಳ ಪಟ್ಟಿ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ / ವಾರ್ಡ್ | ಅರ್ಧ ವಾರ್ಷಿಕ | |
| | | | 4) ಕೊಳಚೆ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳ ಪ್ರಸ್ತುತ ಸ್ಥಿತಿ<br>(ಎ) ನೀರು ಸರಬರಾಜು ಮತ್ತು ನಿರ್ಮಲೀಕರಣ – ಸೇರ್ಪಡೆಯಾದ ಸಂಖ್ಯೆ(ಶೇಕಡವಾರು ಸೇರ್ಪಡೆ)<br>(ಬಿ) ರಸ್ತೆ ಮತ್ತು ಚರಂಡಿಗಳ ವಿಸ್ತಾರ (ನೆಲಗಟ್ಟು ಮಾಡಲ್ಪಟ್ಟ / ಮಾಡಲ್ಪಡದ)<br>(ಸಿ) ಶೇಕಡವಾರು ಮನೆಗಳ ಸಂಖ್ಯೆ (ಪಕ್ಕಾ ಮತ್ತು ಕಚ್ಚಾ ಮನೆಗಳು) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ / ವಾರ್ಡ್ | ಅರ್ಧ ವಾರ್ಷಿಕ | |

| ಕ್ರ ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| 10 | ನಗರ ಬಡತನ ನಿರ್ಮೂಲನೆ | ನ.ಸ್ಥ.ಸಂ/ನ.ನಿ/ನ.ಪ್ರಾ | 1) ನಗರ ಬಡತನ ನಿರ್ಮೂಲನಾ ಕಾರ್ಯಕ್ರಮಗಳ ವಿವರ (ಉದಾ: ಎಸ್.ಜೆ.ಎಸ್.ಆರ್.ವೈ ಸೌಕರ್ಯಗಳು) (ಸಂಖ್ಯೆ, ಹಣ ಲಭ್ಯತೆ ಮತ್ತು ವೆಚ್ಚ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | ಆಟದ ಮೈದಾನ / ಉದ್ಯಾನವನಗಳು / ಉಪ ವನಗಳು | | | | |
| 11 | ನಾಗರೀಕ ಸೌಕರ್ಯಗಳು ಮತ್ತು ಸೌಲಭ್ಯಗಳು – ಆಟದ ಮೈದಾನ / ಉದ್ಯಾನವನಗಳು / ಉಪ ವನಗಳು | ನ.ಸ್ಥ.ಸಂ/ನ.ಪ್ರಾ | 1) ಒಟ್ಟು ನಗರ ಸ್ಥಳೀಯ ಸಂಸ್ಥೆಯ ಪ್ರದೇಶದಲ್ಲಿ ಉದ್ಯಾನವನ ಮತ್ತು ಉಪವನಗಳ ಶೇಕಡವಾರು ವಿಸ್ತೀರ್ಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 2) ಅಭಿವೃದ್ಧಿಗೊಳಿಸಲ್ಪಟ್ಟ ಉದ್ಯಾನವನ ಮತ್ತು ಉಪವನಗಳ ಶೇಕಡವಾರು ಸಂಖ್ಯೆ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 3) ಅಭಿವೃದ್ಧಿಗೊಳಿಸುವ ಸಂಸ್ಥೆಯ ಸಂಖ್ಯೆ, ಸ್ಥಳ, ಪ್ರದೇಶ, ಸೌಕರ್ಯಗಳು ಮತ್ತು ವಿವರಗಳು | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| 12 | ಸಾಂಸ್ಕೃತಿಕ, ಶೈಕ್ಷಣಿಕ ಮತ್ತು ಲಲಿತ ಕಲಾ ಕ್ಷೇತ್ರಗಳ ಅಭಿವೃದ್ಧಿ | ನ.ಸ್ಥ.ಸಂ | 1) ಸಮುದಾಯ ಭವನಗಳು, ಸಾಂಸ್ಕೃತಿಕ ಕೇಂದ್ರಗಳು, ಕಲ್ಯಾಣ ಮಂಟಪಗಳು ಮತ್ತು ಪುರಸಭಾ ಶಿಕ್ಷಣ ಕೇಂದ್ರಗಳ ವಿವರ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 2) ಜಾಹೀರಾತು ಫಲಕಗಳು, ದರಗಳು, ಆದಾಯ ಉತ್ಪಾದನೆಯ ವಿವರಗಳು | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| 13 | ಸ್ಮಶಾನಗಳು ಮತ್ತು ರುದ್ರಭೂಮಿಗಳು, ದಹನ ಭೂಮಿಗಳು ಮತ್ತು ವಿದ್ಯುತ್ ದಹನ | ನ.ಸ್ಥ.ಸಂ | 1) ರುದ್ರಭೂಮಿಗಳು ಮತ್ತು ದಹನ ಭೂಮಿ ಸೌಕರ್ಯಗಳ ಲಭ್ಯತೆಯ ಸಂಖ್ಯೆ, ವಿಧ ಮತ್ತು ಸ್ಥಳ, ವಿಧಿಸಲ್ಪಟ್ಟ ಶುಲ್ಕ (ಇದ್ದಲ್ಲಿ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 2) ಶವ ಸಾಗಣಾ ವಾಹನಗಳ ವಿವರ (ಸಂಖ್ಯೆ ಮತ್ತು ಸಂಪರ್ಕ ವಿವರಗಳು) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| 14 | ಜಾನುವಾರು ದೊಡ್ಡಿಗಳು, ಪ್ರಾಣಿಹಿಂಸೆ ನಿವಾರಣೆ | ನ.ಸ್ಥ.ಸಂ | 1) ಲಸಿಕೆ ನೀಡಲ್ಪಟ್ಟ ಅಲೆಮಾರಿ ದನಗಳ ಸಂಖ್ಯೆ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 2) 'ಕಾಂಜಿ ಮನೆ'ಗಳ ಪಟ್ಟಿ (ಅಲೆಮಾರಿ ದನಗಳ ಪಾಲನಾ ಕೇಂದ್ರಗಳು) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| 15 | ಮಹತ್ವ ಅಂಕಿ–ಅಂಶಗಳು, ಜನನ ಮತ್ತು ಮರಣಗಳನ್ನೊಳಗೊಂಡಂತೆ | ನ.ಸ್ಥ.ಸಂ | 1) ನಗರಕ್ಕೆ ಸಂಬಂಧಿಸಿದ ಸಾಮಾನ್ಯ ಮಾಹಿತಿ (ಜನಸಂಖ್ಯೆ, ವಿಸ್ತೀರ್ಣ ಕುಟುಂಬಗಳು ಇತ್ಯಾದಿ) | ಪ್ರಸಕ್ತ ಸ್ಥಿತಿ ಮತ್ತು ಇತ್ತೀಚಿನ ಜನಗಣತಿ ವಿವರಗಳು | ನ.ಸ್ಥ.ಸಂ | ವಾರ್ಷಿಕ | |
| | | | 2) ನಾಗರೀಕ ಸೇವಾ ಕೇಂದ್ರಗಳ ಸ್ಥಳವಿವರಗಳನ್ನೊಳಗೊಂಡ ಪಟ್ಟಿ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 3) ಜನನ ಮತ್ತು ಮರಣಗಳ ನೊಂದಣಿ ಮತ್ತು ಜನನ ಮತ್ತು ಮರಣಗಳ ಪ್ರಮಾಣ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ಅರ್ಧ ವಾರ್ಷಿಕ | |
| | | | 4) ಪ್ರಕಟಿಸಬೇಕಾದ ನಾಗರೀಕ ಸೇವಾ ಪಟ್ಟಿ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |

| ಕ್ರ. ಸಂ. | 12ನೇ ಅನುಸೂಚಿಯನ್ವಯ ಕಾರ್ಯಗಳು | ತಮ್ಮ ಕಾರ್ಯವ್ಯಾಪ್ತಿಯಲ್ಲಿ ಜವಾಬ್ದಾರಿತ ಸಂಸ್ಥೆ | ಪ್ರಕಟಿಸಬೇಕಾದ ದತ್ತಾಂಶ | ಮಾಹಿತಿಯನ್ನು ಪ್ರಕಟಿಸಬೇಕಾದ ಅವಧಿ | ಪ್ರಕಟಿತ ಮಟ್ಟ (ನ.ಸ್ಥ.ಸಂ/ವಾರ್ಡ್) | ಪ್ರಕಟಣೆಯ ಪುನರಾವರ್ತನೆ | ಷರಾ |
|---|---|---|---|---|---|---|---|
| 16 | ಬೀದಿ ದೀಪಗಳು, ವಾಹನ ನಿಲುಗಡೆಗಳು, ಬಸ್ಸು ನಿಲುಗಡೆಗಳು ಮತ್ತು ಸಾರ್ವಜನಿಕ ಸೌಕರ್ಯಗಳನ್ನೊಳಗೊಂಡಂತೆ ಸಾರ್ವಜನಿಕ ಸೌಲಭ್ಯಗಳು | ನ.ಸ್ಥ.ಸಂ | 1) ಬೀದಿ ದೀಪಗಳ ಸಂಖ್ಯೆ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 2) ಬೀದಿ ದೀಪಗಳ ಸಂಖ್ಯೆ / ರಸ್ತೆಯ ವಿಸ್ತೀರ್ಣ (ಕಿ.ಮೀ ಗಳಲ್ಲಿ)(ಸಂಖ್ಯೆಗಳು) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | ಸೇವಾಮಟ್ಟದ ಮಾನದಂಡದ ಕೈಪಿಡಿಯಲ್ಲಿ ವ್ಯಾಖ್ಯಾನಿಸಿರುವಂತೆ |
| | | | 3) ಬೀದಿ ದೀಪಗಳ ಮೇಲ್ವಿಚಾರಣೆ ಮಾಡುವ ಸಂಸ್ಥೆಯ ವಿವರಗಳು (ಹೆಸರು ಮತ್ತು ಸಂಪರ್ಕ ವಿವರ) | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 4) ವಾಹನ ನಿಲುಗಡೆ ಸಾಮರ್ಥ್ಯ ಮತ್ತು ಶುಲ್ಕ ವಿವರಗಳನ್ನೊಳಗೊಂಡ ಸ್ಥಳಗಳ ಪಟ್ಟಿ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| | | | 5) ಬಸ್ ನಿಲುಗಡೆ ಸಾರ್ವಜನಿಕ ಶೌಚಾಲಯಗಳ ಸಂಖ್ಯೆ ಮತ್ತು ಸ್ಥಳ ಹಾಗೂ ಶುಲ್ಕ | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |
| 17 | ಕಸಾಯಿ ಖಾನೆಗಳು ಮತ್ತು ಚರ್ಮಕಾರಗಳ ನಿಯಂತ್ರಣ | ನ.ಸ್ಥ.ಸಂ | 1) ಕಸಾಯಿ ಖಾನೆಗಳು / ಚರ್ಮಕಾರಗಳ ಸಂಖ್ಯೆ, ಸ್ಥಳ ಮತ್ತು ಸಾಮರ್ಥ್ಯ ಹಾಗೂ ಸೌಕರ್ಯಗಳು | ಪ್ರಸಕ್ತ ಸ್ಥಿತಿ | ನ.ಸ್ಥ.ಸಂ | ವಾರ್ಷಿಕ | |

**ಎಸ್. ರೇಣುಕಾರಾಧ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್.956